

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 362 (510) |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 16/12/2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ ಜಿಲ್ಲೆಯ ಕಟ್ಟಡ ಕಾರ್ಮಿಕರ/ ಕಾರ್ಮಿಕರ ಒಟ್ಟು ಸಂಖ್ಯೆ ಎಷ್ಟು : (ತಾಲ್ಲೂಕುವಾರು ವಿವರ ನೀಡುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ವಿವಿಧ ಮಂಡಳಿಗಳಲ್ಲಿ ನೋಂದಣಿಯಾಗಿರುವ ಕಾರ್ಮಿಕರ ವಿವರಗಳು ಈ ಕೆಳಗಿನಂತಿರುತ್ತವೆ: |

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**

ಮಂಡಳಿಯ ಫಲಾನುಭವಿಗಳಾಗಿ ಬೀದರ್ ಜಿಲ್ಲೆಯಲ್ಲಿ 1,93,870 ನೋಂದಾಯಿತರಾಗಿರುತ್ತಾರೆ. ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ:

| ಕ್ರ.ಸಂ | ತಾಲ್ಲೂಕು | ನೋಂದಣಿಯಾದ ಕಟ್ಟಡ ಕಾರ್ಮಿಕರ ಸಂಖ್ಯೆ |
|---|---|---|
| 1 | ಔರಾದ್ | 25721 |
| 2 | ಬಸವಕಲ್ಯಾಣ | 19824 |
| 3 | ಬೀದರ್ | 82635 |
| 4 | ಹುಮನಾಬಾದ್ | 33254 |
| 5 | ಭಾಲ್ಕಿ | 32438 |
| | **ಒಟ್ಟು** | **193870** |

**ಕರ್ನಾಟಕ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**

ಅಸಂಘಟಿತ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ ಈವರೆಗೆ ಕಾರ್ಮಿಕ ಇಲಾಖೆಯಿಂದ ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲ. ಆದ್ದರಿಂದ ಅಸಂಘಟಿತ ಕಾರ್ಮಿಕರ ನಿಖರ ಸಂಖ್ಯೆ ಲಭ್ಯವಿರುವುದಿಲ್ಲ. ಆದರೆ ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳು ಹಾಗೂ ಕೋವಿಡ್-19 ಪರಿಹಾರಕ್ಕಾಗಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ಸಂಖ್ಯೆ ಲಭ್ಯವಿದ್ದು, **ಬೀದರ್ ಜಿಲ್ಲೆಗೆ** ಸಂಬಂಧಿಸಿದ ತಾಲ್ಲೂಕುವಾರು ವಿವರ ಈ ಕೆಳಗಿನಂತಿದೆ:

| ಕ್ರ.ಸಂ | ಯೋಜನೆ | ತಾಲ್ಲೂಕು | ಕಾರ್ಮಿಕರು |
|---|---|---|---|
| 1 | ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ (ವಾಣಿಜ್ಯ ವಾಹನ ಚಾಲಕರು) | ಹುಮ್ನಾಬಾದ್ | 5222 |
| | | ಬೀದರ್ | 9285 |
| | | ಬಸವಕಲ್ಯಾಣ | 5126 |
| | | ಬಾಲ್ಕಿ | 3084 |
| | | ಔರಾದ್ | 2615 |
| | ಒಟ್ಟು | | **25332** |

| | | | |
|---|---|---|---|
| 2 | ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ | ಹುಮ್ನಾಬಾದ್ | 571 |
| | | ಬೀದರ್ | 1263 |
| | | ಬಸವಕಲ್ಯಾಣ | 1198 |
| | | ಬಾಲ್ಕಿ | 408 |
| | | ಔರಾದ್ | 74 |
| ಒಟ್ಟು | | | **3514** |
| 3 | ಕೋವಿಡ್-19ರ ವಿಶೇಷ ಪ್ಯಾಕೇಜ್ (ಮೊದಲನೆ ಅಲೆ) | ಔರಾದ್ | 354 |
| | | ಬಸವಕಲ್ಯಾಣ | 603 |
| | | ಬಾಲ್ಕಿ | 581 |
| | | ಬೀದರ್ | 1193 |
| | | ಚಿಟಗುಪ್ಪ | 240 |
| | | ಹುಮ್ನಾಬಾದ್ | 627 |
| | | ಹುಲ್ಸೂರು | 95 |
| | | ಕಮಲ್‌ನಗರ | 188 |
| ಒಟ್ಟು | | | **3881** |
| 4 | ಕೋವಿಡ್-19ರ ವಿಶೇಷ ಪ್ಯಾಕೇಜ್ (ಎರಡನೆ ಅಲೆ) | ಔರಾದ್ | 4226 |
| | | ಬಸವಕಲ್ಯಾಣ | 15989 |
| | | ಬಾಲ್ಕಿ | 2966 |
| | | ಬೀದರ್ | 15261 |
| | | ಚಿಟಗುಪ್ಪ | 6431 |
| | | ಹುಮ್ನಾಬಾದ್ | 7485 |
| | | ಹುಲ್ಸೂರು | 1170 |
| | | ಕಮಲ್‌ನಗರ | 3299 |
| ಒಟ್ಟು | | | **56827** |

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**ಯಲ್ಲಿ ಕಾರ್ಮಿಕರ ನೊಂದಣಿ ವ್ಯವಸ್ಥೆ ಇರುವುದಿಲ್ಲ. ಆದರೆ ಮಂಡಳಿಗೆ 20:40 ರ ಅನುಪಾತದಲ್ಲಿ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರು ಮಂಡಳಿಯ ವ್ಯಾಪ್ತಿಗೆ ಒಳಪಡುತ್ತಾರೆ. **ಬೀದರ್ ಜಿಲ್ಲೆಯಲ್ಲಿ ಒಟ್ಟು 5,037 ಸಂಘಟಿತ ಕಾರ್ಮಿಕರಿದ್ದಾರೆ.** ಕಾರ್ಮಿಕ ಇಲಾಖೆಯಿಂದ ಕಾರ್ಮಿಕರ ಸಂಖ್ಯೆಯ ಬಗ್ಗೆ ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲವಾದ್ದರಿಂದ ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ.

| | | |
|---|---|---|
| ಆ) | ಈ ಕಾರ್ಮಿಕರಿಗೆ ಅನುಕೂಲವಾಗುವಂತೆ ಇರುವ ಯೋಜನೆಗಳಾವುವು: ಎಷ್ಟು ಕಾರ್ಮಿಕರಿಗೆ ಅನುಕೂಲ ಮಾಡಿಕೊಡಲಾಗಿದೆ: (ತಾಲ್ಲೂಕುವಾರು ವಿವರ ನೀಡುವುದು) | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ** ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಭಿತರಿಗೆ ರೂಪಿಸಿರುವ ಸೌಲಭ್ಯಗಳ ವಿವರವನ್ನು **ಅನುಬಂಧ-1 ರಲ್ಲಿ** ಲಗತ್ತಿಸಿದೆ.<br>ಈ ಸೌಲಭ್ಯಗಳಡಿ ಬೀದರ್ ಜಿಲ್ಲೆಯಲ್ಲಿ ಸಹಾಯಧನ ಪಡೆದ ತಾಲ್ಲೂಕುವಾರು ಮಾಹಿತಿಯನ್ನು **ಅನುಬಂಧ-2ರಲ್ಲಿ** ಲಗತ್ತಿಸಿದೆ.<br>**ಕರ್ನಾಟಕ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**ಯು ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ರಾಜ್ಯ ಸರ್ಕಾರದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** |

ಈ ಯೋಜನೆಯಡಿ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಕರು ಮತ್ತು ಕ್ಲೀನರ್‌ಗಳು ಫಲಾನುಭವಿಗಳಾಗಿದ್ದು, ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.

(ಅ) **ಅಪಘಾತ ಪರಿಹಾರ ಸೌಲಭ್ಯ:** ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ವರಗೆ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.

(ಆ) **ಶೈಕ್ಷಣಿಕ ಧನ ಸಹಾಯ** : ಅಪಘಾತದ ಕಾರಣ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

**ಬೀದರ್ ಜಿಲ್ಲೆಯಲ್ಲಿ ಸೌಲಭ್ಯ ಪಡೆದ ಅಸಂಘಟಿತ ಕಾರ್ಮಿಕರ ತಾಲ್ಲೂಕುವಾರು ವಿವರ ಈ ಕೆಳಗಿನಂತಿದೆ.**

| ಕ್ರಸಂ | ತಾಲ್ಲೂಕು | ಅಪಘಾತ ಪರಿಹಾರ | ಶೈಕ್ಷಣಿಕ ಧನ ಸಹಾಯ |
|---|---|---|---|
| 1 | ಔರಾದ್ | – | – |
| 2 | ಬಸವಕಲ್ಯಾಣ | 2 | – |
| 3 | ಬಾಲ್ಕಿ | – | 3 |
| 4 | ಬೀದರ್ | 5 | 2 |
| 5 | ಚಿಟಗುಪ್ಪ | – | – |
| 6 | ಹುಮ್ನಾಬಾದ್ | 2 | 5 |
| 7 | ಹುಲ್ಸೂರು | – | – |
| 8 | ಕಮಲ್‌ನಗರ | – | – |
| ಒಟ್ಟು | | **09** | **10** |

**(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-</u>**

ಪ್ರಸ್ತುತ, ಈ ಯೋಜನೆಯಡಿ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟ್ಶೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್‌ಕಾರ್ಡ್ ನೀಡಲಾಗುತ್ತಿದೆ. ತಾಲ್ಲೂಕುವಾರು ವಿವರ ಈ ಕೆಳಗಿನಂತಿದೆ.

| ಕ್ರ ಸಂ | ತಾಲ್ಲೂಕು | ಕಾರ್ಮಿಕ ಸಂಖ್ಯೆ |
|---|---|---|
| 1 | ಹುಮ್ನಾಬಾದ್ | 571 |
| 2 | ಬೀದರ್ | 1263 |
| 3 | ಬಸವಕಲ್ಯಾಣ | 1198 |
| 4 | ಬಾಲ್ಕಿ | 408 |
| 5 | ಔರಾದ್ | 74 |
| ಒಟ್ಟು | | **3514** |

- **<u>ಕೋವಿಡ್-19 ರ ಮೊದಲನೆ ಅಲೆಯ ವಿಶೇಷ ಪ್ಯಾಕೇಜ್:</u>**

ಕೋವಿಡ್-19ರ 2020ನೇ ವರ್ಷದ ಮೊದಲನೆ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಅಗಸ ಮತ್ತು ಕ್ಷೌರಿಕ ವೃತ್ತಿ

| | | |
|---|---|---|
| | | ನಿರ್ವಹಿಸುತ್ತಿರುವ ಅಸಂಘಟಿತ ಕಾರ್ಮಿಕರಿಗೆ ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ ಒಂದು ಬಾರಿಯ ರೂ.5,000/- ಗಳ ವಿಶೇಷ ಪ್ಯಾಕೇಜ್ ಅಡಿ ಬೀದರ್ ಜಿಲ್ಲೆಯಲ್ಲಿ ಈವರೆಗೆ 2885 ಕಾರ್ಮಿಕರಿಗೆ ತಲಾ ರೂ.5,000/-ಗಳಂತೆ ಒಟ್ಟು ರೂ.1.44 ಕೋಟಿಗಳ ಪರಿಹಾರವನ್ನು ಮಂಡಳಿಯ ಮೂಲಕ ನೀಡಲಾಗಿದೆ. |

- **ಕೋವಿಡ್-19 ರ ಎರಡನೆ ಅಲೆಯ ವಿಶೇಷ ಪ್ಯಾಕೇಜ್:**

ಕೋವಿಡ್-19ರ 2021ನೇ ವರ್ಷದ ಎರಡನೇ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ 11 ವರ್ಗಗಳಾದ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರಿಗೆ ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ ತಲಾ ರೂ. 2,000/-ಗಳ ಒಂದು ಬಾರಿಯ ವಿಶೇಷ ಪ್ಯಾಕೇಜ್ ಅಡಿ ಬೀದರ್ ಜಿಲ್ಲೆಯಲ್ಲಿ ಈವರೆಗೆ 31,600 ಕಾರ್ಮಿಕರಿಗೆ ತಲಾ ರೂ.2,000/-ಗಳಂತೆ ಒಟ್ಟು ರೂ. 6.32 ಕೋಟಿಗಳ ಪರಿಹಾರವನ್ನು ಮಂಡಳಿಯ ಮೂಲಕ ನೀಡಲಾಗಿದೆ. ಮೇಲ್ಕಂಡ ಎರಡೂ ಅಲೆಯ ಕಾರಣ ಸೌಲಭ್ಯ ಪಡೆದ ಅಸಂಘಟಿತ ಕಾರ್ಮಿಕರ ತಾಲ್ಲೂಕುವಾರು ವಿವರ ಈ ಕೆಳಗಿನಂತಿದೆ.

| ಕ್ರ.ಸಂ | ತಾಲ್ಲೂಕು | ಕೋವಿಡ್-19ರಡಿ ನೆರವು (ಮೊದಲನೆ ಅಲೆ) | ಕೋವಿಡ್-19ರಡಿ ನೆರವು (ಎರಡನೆ ಅಲೆ) |
|---|---|---|---|
| 1 | ಔರಾದ್ | 290 | 2123 |
| 2 | ಬಸವಕಲ್ಯಾಣ | 492 | 10960 |
| 3 | ಬಾಲ್ಕಿ | 437 | 1808 |
| 4 | ಬೀದರ್ | 922 | 6647 |
| 5 | ಚಿಟಗುಪ್ಪ | 172 | 3508 |
| 6 | ಹುಮ್ನಾಬಾದ್ | 369 | 3974 |
| 7 | ಹುಲ್ಸೂರು | 70 | 748 |
| 8 | ಕಮಲ್‌ನಗರ | 133 | 1832 |
| ಒಟ್ಟು | | **2885** | **31600** |

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ವರ್ಷಕ್ಕೆ ಒಂದು ಬಾರಿ 20:40ರ ಅನುಪಾತದಲ್ಲಿ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಯೋಜನೆಯಡಿ ಸೌಲಭ್ಯಗಳನ್ನು ನೀಡಲಾಗುತ್ತಿದೆ.

1) **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ**
2) **ಕಾರ್ಮಿಕರಿಗೆ ವೈದ್ಯಕೀಯ ನೆರವು**
3) **ಕಾರ್ಮಿಕರಿಗೆ ಅಪಘಾತ ಧನ ಸಹಾಯ**
4) **ಹೆರಿಗೆ ಭತ್ಯೆ ಸೌಲಭ್ಯ**
5) **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ**
6) **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ**
7) **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ**

ಬೀದರ್ ಜಿಲ್ಲೆಯಲ್ಲಿ 2020-21ನೇ ಸಾಲಿಗೆ 39 ಫಲಾನುಭವಿಗಳಿಗೆ ರೂ. 1,91,000/- ಗಳ ಧನ ಸಹಾಯ ಮಾಡಲಾಗಿದೆ. ತಾಲ್ಲೂಕುವಾರು ವಿವರಗಳು ಈ ಕೆಳಕಂಡಂತಿದೆ.

| ತಾಲ್ಲೂಕು | ಫಲಾನುಭವಿಗಳ ಸಂಖ್ಯೆ | ಮೊತ್ತ |
|---|---|---|
| ಬೀದರ್ | 13 | 61,000 |
| ಔರಾದ್ | 2 | 10,000 |
| ಹುಮ್ನಾಬಾದ್ | 15 | 75,000 |
| ಭಾಲ್ಕಿ | 4 | 20,000 |
| ಬಸವ ಕಲ್ಯಾಣ | 5 | 25,000 |
| ಒಟ್ಟು | 39 | 1,91,000 |

ಇ) ಸದರಿ ಕಾರ್ಮಿಕರಿಗೆ ಸ್ಪಂದಿಸಲು ಇಲಾಖೆಯಲ್ಲಿ ಸಿಬ್ಬಂದಿಗಳಿದ್ದಾರೆಯೇ: ಇದ್ದಲ್ಲಿ, ಅವರ ಮಾಹಿತಿ ನೀಡುವುದು: ಸಿಬ್ಬಂದಿಗಳು ಖಾಲಿ ಇದ್ದಲ್ಲಿ ಭರ್ತಿ ಮಾಡುವ ಪ್ರಕ್ರಿಯೆಯನ್ನು ಯಾವ ಕಾಲಮಿತಿಯಲ್ಲಿ ಪ್ರಾರಂಭಿಸಲಾಗುವುದು?

ಬೀದರ್ ಜಿಲ್ಲೆಗೆ ಸಂಬಂಧಿಸಿದಂತೆ ಮಂಜೂರಾದ, ಭರ್ತಿ ಹಾಗೂ ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ ಸಂ. | ಹುದ್ದೆವಾರು | ಮಂಜೂರು | ಭರ್ತಿ | ಖಾಲಿ |
|---|---|---|---|---|
| 1 | ಕಾರ್ಮಿಕ ಅಧಿಕಾರಿ | 01 | 01 | - |
| 2 | ಕಾರ್ಮಿಕ ನಿರೀಕ್ಷಕರು | 05 | 04 | 01 |
| 3 | ಪ್ರಥಮ ದರ್ಜೆ ಸಹಾಯಕರು | 01 | 01 | - |
| 4 | ದ್ವಿತೀಯ ದರ್ಜೆ ಸಹಾಯಕರು | 01 | 01 | - |
| 5 | ಬೆರಳಚ್ಚುಗಾರರು | 01 | - | 01 |
| 6 | ಜವಾನರು | 01 | - | 01 |

ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಜಿಲ್ಲಾ ಮಟ್ಟದ ಕಾರ್ಮಿಕ ಇಲಾಖೆಯ ಕಛೇರಿಗಳಿಗೆ ಯಾವುದೇ ಖಾಯಂ ಸಿಬ್ಬಂದಿಯನ್ನು ನೇಮಕ ಮಾಡಿರುವುದಿಲ್ಲ, ಆದರೆ, ಮಂಡಳಿಯ ಕೆಲಸಗಳನ್ನು ನಿರ್ವಹಿಸಲು ಅಂದರೆ, ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಾರ್ಮಿಕರ ನೋಂದಣಿ, ಕ್ಲೇಮ್ ಅರ್ಜಿಗಳ ವಿಲೇವಾರಿಗಾಗಿ ಮಂಡಳಿಯಿಂದ ಹೊರಗುತ್ತಿಗೆ ಆಧಾರದ ಮೇಲೆ ಎಕ್ಸಿಕ್ಯೂಟಿವ್ ಹಾಗೂ ಡೇಟಾ ಎಂಟ್ರಿ ಆಪರೇಟರ್‌ಗಳನ್ನು ಕಾರ್ಮಿಕ ಇಲಾಖೆಯ ಕ್ಷೇತ್ರ ಮಟ್ಟದ ಅಧಿಕಾರಿಗಳು ಮತ್ತು ನಿರೀಕ್ಷಕರಿಗೆ ಒದಗಿಸಲಾಗಿರುತ್ತದೆ. ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅವಶ್ಯಕ ಖಾಯಂ ಸಿಬ್ಬಂದಿಗಳನ್ನು ನೇಮಕ ಮಾಡಲು ಕ್ರಮವಹಿಸಲಾಗುತ್ತಿದೆ.

ಮುಂದುವರೆದು, ಕರ್ನಾಟಕ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಮತ್ತು ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗಳ ಸೌಲಭ್ಯಗಳನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದಲ್ಲಿ ಸ್ಥಾಪಿತವಾದ

| | | |
|---|---|---|
| | | ಕಛೇರಿಗಳಿರುವುದಿಲ್ಲ. ಯೋಜನೆಗಳನ್ನು ಕಾರ್ಮಿಕ ಇಲಾಖೆಯ ಮೂಲಕ ಅನುಷ್ಠಾನಗೊಳಿಸುತ್ತಿದ್ದು, ಜಿಲ್ಲಾ ಕಾರ್ಮಿಕ ಕಛೇರಿಗಳ ಮೂಲಕ ಸಂಘಟಿತ ಕಾರ್ಮಿಕರಲ್ಲಿ ಅರಿವು ಮೂಡಿಸಿ ಮಂಡಳಿಯ ಕಲ್ಯಾಣ ಯೋಜನೆಗಳ ಸೌಲಭ್ಯಗಳನ್ನು ಫಲಾನುಭವಿಗಳ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ತಲುಪಿಸಲಾಗುತ್ತಿದೆ. |

**ಕಾಇ 535 ಎಲ್ಇಟಿ 2021**

*(ಅರಬೈಲ್ ಶಿವರಾಂ ಹೆಬ್ಬಾರ್)*
ಕಾರ್ಮಿಕ ಸಚಿವರು